ಡಾ|| ಶ್ರೀನಿವಾಸ ವೆಂ. ಪಾಡಿಗಾರ

# ಸೂರ್ಯ ಮತ್ತು ಬ್ರಹ್ಮ-ಸೂಳೆಭಾವಿಯ ಬಾದಾಮಿ ಚಾಲುಕ್ಯರ ಇಮಾರತಿನ ಬೆಳಕಿನಲ್ಲಿ

೧೯೮೮ರ ಬೇಸಿಗೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನಭಾರತದ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗದ ಪರವಾಗಿ ವಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ಗ್ರಾಮಗಳ ಪುರಾತತ್ವ ಅನ್ವೇಷಣೆ ಕೈಗೊಳ್ಳುವ ಸುಯೋಗ ನನಗೊದಗಿತ್ತು. ಆ ಸಂದರ್ಭದಲ್ಲಿ ಅಮೀನಗಡದಿಂದ ಐಹೊಳೆಗೆ ಹೋಗುವ ಮಾರ್ಗದಲ್ಲಿ ಸುಮಾರು ಎರಡು ಕಿ.ಮೀ. ಅಂತರದಲ್ಲಿರುವ ಸೂಳಿಭಾವಿ ಗ್ರಾಮದ ಅನ್ವೇಷಣೆ ಮಾಡಿದ್ದೆ. ಈ ಗ್ರಾಮದ ದಕ್ಷಿಣಭಾಗದಲ್ಲಿ 'ಸೂಳಿಗುಡಿ' ಎಂದು ಕರೆಯಲ್ಪಡುವ ಇಮಾರತು ಇದೆ. ನಿಜವಾಗಿ ಇದೊಂದು ಮೆಟ್ಟಿಲುಗಳುಳ್ಳ ಬಾವಿಯ ಎದುರು ನಿಂತಿರುವ ಪ್ರತೋಳಿ. ವೇಶ್ಯೆಯೊಬ್ಬಳು ಕಟ್ಟಿಸಿದ್ದರಿಂದ 'ಸೂಳಿಗುಡಿ' ಹೆಸರು ಬಂದಿತೆಂದು ಪ್ರತೀತಿ. ೧೯೫೦ರಲ್ಲಿ ಇದರಲ್ಲಿ 'ಸೂಲೇಶ್ವರ' (ಶೂಲೇಶ್ವರ) ಎಂಬ ಹೆಸರಿನ ಲಿಂಗ ಪ್ರತಿಷ್ಠಾಪನೆಯಾದ ವಿಷಯ ಕಂಬದ ಮೇಲಿನ ಶಾಸನದಿಂದ ತಿಳಿಯುತ್ತದೆ.

ಕ್ಯಾರೊಲ್ ಬೊಲಾನ್ ಅವರು ಈಗಾಗಲೇ ಈ ಪ್ರತೋಳಿಯ ವಿವರಗಳನ್ನು ಪ್ರಸಿದ್ಧಿಸಿದ್ದಾರೆ.[1] ಆದ್ದರಿಂದ ನಮ್ಮ ಸದ್ಯದ ಅಧ್ಯಯನಕ್ಕೆ ಸಮಂಜಸವೆನಿಸುವ ವಿಷಯಗಳನ್ನಷ್ಟೇ ಇಲ್ಲಿ ಗಮನಿಸಿದರೆ ಸಾಕು. ಇಂಗ್ಲಿಷ್ 'T' ಆಕಾರದ ವಿನ್ಯಾಸವುಳ್ಳ, ಮೆಟ್ಟಿಲುಗಳುಳ್ಳ ಬಾವಿಯ ಮುಂದೆ ದಕ್ಷಿಣಾಭಿಮುಖವಾಗಿ ಪ್ರತೋಳಿ ನಿಂತಿದೆ. (ಛಾಯಾಚಿತ್ರ ೧). ಇದಕ್ಕೆ ಎರಡು ಭಾಗಗಳು: ಮುಂದೆ ತೆರೆದ ಮುಖಮಂಟಪ ಮತ್ತು ಅದಕ್ಕೆ ಹೊಂದಿಕೊಂಡ ಮುಚ್ಚಿರುವ (ಗೋಡೆಗಳಿರುವ) ಮಂಟಪ. ರುಚಕ ಮಾದರಿಯ (ಚೌಕ ವಿನ್ಯಾಸದ) ಕಂಬಗಳು, ಅವುಗಳ ಮೇಲಿನ ಕೆತ್ತನೆಗಳು, ಮಂಟಪದ ದ್ವಾರಬಂಧದ ರಚನೆ ಮತ್ತು ಕೆತ್ತನೆ (ಉದಾ : ಗರುಡ-ನಾಗಶಾಖೆಯ ಬಳಕೆ) (ಛಾಯಾಚಿತ್ರ ೨). ಮಂಟಪದ ಗೋಡೆ-ಕಂಬಗಳ ಮೇಲಿನ ಶಾಸನಗಳ ಲಿಪಿಲಕ್ಷಣ-ಇವುಗಳನ್ನು ಸೂಕ್ಷ್ಮವಾಗಿಪರೀಕ್ಷಿಸಿದರೆ, ಇದು ನಿಸ್ಸಂಶಯವಾಗಿ ಬಾದಾಮಿಯ ಚಾಲುಕ್ಯರ ಆಡಳಿತದ ಉತ್ತರಾರ್ಧದಲ್ಲಿ ನಿರ್ಮಿತವಾದ ಕಟ್ಟಡವೆಂಬುದು ಸ್ಪಷ್ಟವಾಗುತ್ತದೆ.

ಸದ್ಯ ನಾವು ವಿಶೇಷವಾಗಿ ಗಮನಿಸಬೇಕಾದ ಸಂಗತಿಗಳಿವು :

೧. ಮಂಟಪದ ದಕ್ಷಿಣ ದ್ವಾರಬಂಧದ ಮೇಲ್ಗಡೆ ಕೂಟ-ಪಂಜರ-ಶಾಲಗಳಲ್ಲಿ ಚಿಕಣಿ ಪ್ರತಿಮೆಗಳಿವೆ : ಇವುಗಳಲ್ಲಿ ಮುಖ್ಯ (ಮಧ್ಯದ) ಚೈತ್ಯಕೂಡಿನಲ್ಲಿ ಸಮಪಾದದಲ್ಲಿರುವ ಸೂರ್ಯ ತನ್ನೆರಡೂ ಕೈಗಳಲ್ಲಿ ಪದ್ಮಧಾರಿಯಾಗಿ ನಿಂತಿದ್ದಾನೆ. (ಛಾಯಾಚಿತ್ರ ೩).

೨. ಮಂಟಪದ ಮೇಲ್ಭಾವಣಿಯಲ್ಲಿ ವರಾಹರೂಪಿ ವಿಷ್ಣು (ದಕ್ಷಿಣ), ಹಂಸಾರೂಢ ಬ್ರಹ್ಮ (ಮಧ್ಯೆ) ಮತ್ತು ಕಾಲಾರಿ ಶಿವ (ಉತ್ತರ) ಇವರ ಕೆತ್ತನೆಗಳಿವೆ.

---

1. M. A. Dhaky *et. al* : *Encyclopaedia of Indian Architecture : Upper Dravidadesa*

೩. ಮಂಟಪದ ಉತ್ತರ ದ್ವಾರಬಂಧದಲ್ಲಿ ಮೇಲ್ಗಡೆ ವೃಷಭಾರೂಢ ಶಿವ, ಹಂಸಾರೂಢ ಬ್ರಹ್ಮ (ಮಧ್ಯೆ) ಮತ್ತು ಗರುಡಾರೂಢ ವಿಷ್ಣು ಇವರ ಶಿಲ್ಪ ಪಟ್ಟಿಕೆ ಇದೆ. (ಛಾಯಾಚಿತ್ರ ೪).

ಒಟ್ಟಿನಲ್ಲಿ ಆದಿತ್ಯ, ಬ್ರಹ್ಮರಿಗೆ ಈ ಇಮಾರತಿನಲ್ಲಿ ಪ್ರಮುಖ ಸ್ಥಾನ ಕಲ್ಪಿಸಲಾಗಿದೆ.

ಬಾದಾಮಿಯ ಚಾಲುಕ್ಯರ ಇಮಾರತುಗಳಲ್ಲಿ ತ್ರಿಮೂರ್ತಿಗಳಲ್ಲಿ ಬ್ರಹ್ಮನಿಗೆ ಮಧ್ಯದ, ಅಂದರೆ ಮುಖ್ಯ ಸ್ಥಾನವನ್ನು ಕಲ್ಪಿಸಿರುವುದು ತೀರ ಅಪರೂಪ. ದಕ್ಷಿಣಾಭಿಮುಖವಾಗಿರುವ ದ್ವಾರಬಂಧದಲ್ಲಿ ಆದಿತ್ಯನಿಗೆ ಪ್ರಮುಖ ಸ್ಥಾನವನ್ನು ಕೊಟ್ಟಿರುವದೂ ಗಮನಿಸಬೇಕಾದ ವಿಷಯು. ದ್ವಾರಬಂಧದ ಮೇಲ್ಗಡೆಯ ಆದಿತ್ಯನಿಗೂ ಮಂಟಪದ ಛತ್ತಿನ ಮಧ್ಯ ಹಾಗೂ ಉತ್ತರ ದ್ವಾರಬಂಧದ ಮೇಲ್ಗಡೆಯ ಶಿಲ್ಪಪಟ್ಟಿಕೆಯ ನಡುವಣ ಬ್ರಹ್ಮಶಿಲ್ಪಿಗಳಿಗೂ ಯಾವದೋ ರೀತಿಯ ಪರಸ್ಪರ ಸಂಬಂಧವಿದೆಯೆಂದು ಅನಿಸುತ್ತದೆ. ಆದಿತ್ಯ–ಸೂರ್ಯನನ್ನೂ 'ಹಿರಣ್ಯಗರ್ಭ' ಬ್ರಹ್ಮನನ್ನೂ ಒಂದೇ ದೇವತೆಯೆಂದು ಪರಿಗಣಿಸಲಾಗಿದೆಯೋ ಹೇಗೆ ?

ಒಂದು ದಶಕಕ್ಕಿಂತಲೂ ಹಿಂದೆ ಐಹೊಳೆಯ ದುರ್ಗದ ಗುಡಿಯ ಮೂಲದೈವದ ಕುರಿತಾಗಿ ಬರೆದ ಲೇಖನವೊಂದರಲ್ಲಿ, ಆ ದೇವಾಲಯದ ಶಿಲ್ಪ–ಶಾಸನಗಳನ್ನಾಧರಿಸಿ ಅದು ಮೂಲತಃ ಆದಿತ್ಯ ದೇವಾಲಯುವಾಗಿತ್ತೆಂದು ನಾನು ವಾದಿಸಿದ್ದೆ.[2] ಆ ಸಂದರ್ಭದಲ್ಲಿ ಅ. ಸುಂದರ ಅವರು ಆಗಲೇ ಈ ದೇವಾಲಯದ ಮೂಲದೈವದ ಕುರಿತಾಗಿ ಮಂಡಿಸಿದ್ದ 'ಬ್ರಹ್ಮದೈವ' ವಾದವನ್ನು ಅಲ್ಲಗಳೆದಿದ್ದೆ. ದುರ್ಗದ ಗುಡಿಯ ಸಭಾಮಂಟಪದ ದ್ವಾರಬಂಧದ ಮೇಲ್ಗಡೆ ಪ್ರಮುಖವಾಗಿ ಬ್ರಹ್ಮನ ಚಿಕಣಿಶಿಲ್ಪವಿದ್ದುದು ಅವರ ವಾದಕ್ಕೆ ಮುಖ್ಯ ಆಧಾರವಾಗಿತ್ತು. ಅವರ ಪ್ರಕಾರ, ದುರ್ಗದ ಗುಡಿ ಬ್ರಹ್ಮದೇವಾಲಯ. ಬ್ರಹ್ಮನ ಚಿಕಣಿಶಿಲ್ಪದ ಮೇಲೆ ಆದಿತ್ಯನ ಚಿಕಣಿಶಿಲ್ಪವಿದ್ದುದನ್ನು ನಾನು ನನ್ನ ಲೇಖನದಲ್ಲಾಗಲೇ ಗಮನಕ್ಕೆ ತಂದಿದ್ದೇನೆ. ಸೂಳೆಭಾವಿಯ ಪ್ರಸ್ತುತ ಇಮಾರತಿನ ಬೆಳಕಿನಲ್ಲಿ ಅ. ಸುಂದರ ಅವರ ವಾದವನ್ನು ಪುನರ್‌ಪರಿಶೀಲಿಸಬೇಕಾಗುತ್ತದೆ. ದುರ್ಗದ ಗುಡಿಯ ಸಭಾಮಂಟಪದ ದ್ವಾರಬಂಧದ ಮೇಲ್ಗಡೆಯ ಶಾಲ–ದೇಗುಲ ಮಾದರಿಯಲ್ಲಿ ಕೆತ್ತಿರುವ ಆದಿತ್ಯ ಮತ್ತು ಅದರ ಕೆಳಗಿನ ಬ್ರಹ್ಮ ಇವರ ಚಿಕಣಿಶಿಲ್ಪಗಳು ಪರಸ್ಪರ ಸಂಬಂಧ ಹೊಂದಿವೆ. (ಛಾಯಾಚಿತ್ರ ೫). ಆದಿತ್ಯ–ಸೂರ್ಯ ಹಾಗೂ 'ಹಿರಣ್ಯಗರ್ಭ' ಬ್ರಹ್ಮ ಇವರಿಬ್ಬರನ್ನೂ ಇಲ್ಲಿ ಒಂದೇ ದೈವವೆಂದು ಪರಿಗಣಿಸಲಾಗಿದೆ. ಆದರೆ ಗರ್ಭಗೃಹದಲ್ಲಿ ಆದಿತ್ಯಬಿಂಬವಿತ್ತೆಂಬುದರ ಬಗ್ಗೆ ಎರಡು ಮಾತಿಲ್ಲ.

ಬಾದಾಮಿಯ ಚಾಲುಕ್ಯರ ಕಾಲದಲ್ಲಾಗಲೇ ಆದಿತ್ಯ ಹಾಗೂ ಬ್ರಹ್ಮ ಇವರಿಬ್ಬರೂ ಒಂದೇ ದೈವದ ರೂಪಗಳೆಂದು ಪರಿಗಣಿಸಲಾಗಿತ್ತೆಂಬುದು ಮೇಲಿನ ಪುರಾವೆಗಳಿಂದ ಸ್ಪಷ್ಟಪಡುತ್ತದೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ತ್ರೈಪುರುಷ ದೇವಾಲಯಗಳಲ್ಲಿ ಬ್ರಹ್ಮನ ಸ್ಥಾನವನ್ನು ಸೂರ್ಯನು ಆಕ್ರಮಿಸಿರುವುದು ಗೊತ್ತಿರುವ ವಿಷಯ. ಬಾದಾಮಿಯ ಚಾಲುಕ್ಯರ ಕಾಲದಿಂದಾಗಲೇ ಆದಿತ್ಯ–ಬ್ರಹ್ಮ ಒಂದೇ ದೈವವೆಂಬ ಕಲ್ಪನೆ ಬೇರೂರಿದ್ದರಿಂದಲೇ ನಂತರದ ತ್ರೈಪುರುಷ ದೇವಾಲಯಗಳಲ್ಲಿ ಹೆಚ್ಚಾಗಿ ಬ್ರಹ್ಮನ ಬದಲು ಆದಿತ್ಯನನ್ನು ಪ್ರತಿಷ್ಠಾಪಿಸುವ ಪರಂಪರೆ ಬೆಳೆದು ಬಂದಿರಬೇಕು. (ಈ ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕೃಪೆಯಿಟ್ಟು ಒದಗಿಸಿದವರು : ಮುಖ್ಯಸ್ಥರು, ಪ್ರಾಚೀನಭಾರತದ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಅವರಿಗೆ ನನ್ನ ಕೃತಜ್ಞತೆಗಳು).

---

2. S. V. Padigar : 'The Durga Temple Aihole : An Aditya Temple', *Archaeological Studies*. Vol. 2, Mysore, 1977, pp. 59-64